# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1547 (1838) |
| ಸದಸ್ಯರ ಹೆಸರು | : | ಶ್ರೀ ರಘುನಾಥ್ ರಾವ್ ಮಲ್ಕಾಪೂರೆ<br>(ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 24-03-2020 |
| ಉತ್ತರಿಸುವ ಸಚಿವರು | : | ಮಾನ್ಯ ನಗರಾಭಿವೃದ್ಧಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಬೀದರ್ ನಗರದ ಹೊರ ವರ್ತುಲ ರಸ್ತೆ ಸುತ್ತಮುತ್ತ ಇರುವ ಬಡಾವಣೆಗಳಲ್ಲಿ ಮೂಲ ಸೌಕರ್ಯಗಳಿಲ್ಲದೆ ಹಾಗೂ ಕಸ ವಿಲೇವಾರಿ ಮಾಡದಿರುವುದರಿಂದ ಅಲ್ಲಿನ ನಿವಾಸಿಗಳಿಗೆ ತೊಂದರೆ ಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೀದರ್ ನಗರಸಭೆ ವ್ಯಾಪ್ತಿಯಲ್ಲಿ ಮೂಲಭೂತ ಸೌಕರ್ಯಗಳನ್ನು ಕೈಗೊಳ್ಳಲು ರಾಜ್ಯ ಸರ್ಕಾರವು ಈ ಕೆಳಕಂಡ **ವಿವಿಧ ಯೋಜನೆಗಳನ್ನು ಅನುಷ್ಠಾನಗೊಳಸುತ್ತಿವೆ.**<br><br>**<u>ಸ್ವಚ್ಛ ಭಾರತ್ ಮಿಷನ್‌ಯೋಜನೆ:</u>**<br>ಬೀದರ ನಗರಸಭೆಯಲ್ಲಿಒಟ್ಟು 35 ವಾರ್ಡಗಳಿದ್ದು, ಪ್ರತಿ ದಿನ ಸರಿ ಸುಮಾರು 91 ಟನ್ ಕಸ ಉತ್ಪಾದನೆಯಾಗುತ್ತಿದ್ದು, ಸದರಿ ಕಸ ವಿಲೇವಾರಿಗಾಗಿ 6 ಟಾಟಾಏಸ್‌ಟಿಪ್ಪರ ವಾಹನಗಳು, 9 ಲೇಲ್ಯಾಂಡ್ ವಾಹನಗಳು ಮತ್ತು 11 ಟ್ರ್ಯಾಕ್ಟರ್ ವಾಹನಗಳು, 1 ಕಾಂಪ್ಯಾಕ್ಟರ್ ಮತ್ತು 1 ಡಂಪರಪ್ಲೇಸರ್ ವಾಹನಗಳನ್ನು ಪ್ರತಿ ದಿನ ಕಸ ಸಂಗ್ರಹಣೆ ಕೆಲಸಕ್ಕೆ ಉಪಯೋಗಿಸಲಾಗುತ್ತಿದೆ. |
| (ಆ) | ಬಂದಿದ್ದಲ್ಲಿ, ಮೂಲಸೌಕರ್ಯ ಕಲ್ಪಿಸಲು ಕಸ ವಿಲೇವಾರಿ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ಕಸ ವಿಲೇವಾರಿಗೆ ಸಂಬಂಧಿಸಿದಂತೆ ವಿಸ್ತೃತ ಯೋಜನಾ ವರದಿಯನ್ನು ಮೊತ್ತ ರೂ.976.76 ಲಕ್ಷಗಳಿಗೆ 2019-20ನೇ ಸಾಲಿನಲ್ಲಿ ಸಿದ್ಧಪಡಿಸಲಾಗಿರುತ್ತದೆ, ಇದರಲ್ಲಿ ರೂ.456.7ಲಕ್ಷಗಳನ್ನು ವಾಹನಗಳು/ ಯಂತ್ರೋಪಕರಣಗಳ ಖರೀದಿಗಾಗಿ ಹಾಗೂ ಸಿವಿಲ್ ಕಾಮಗಾರಿಗಳಿಗೆ ರೂ.511.70ಲಕ್ಷಗಳನ್ನು ಕಾಯ್ದಿರಿಸಲಾಗಿರುತ್ತದೆ, ಈ ಸಂಬಂಧ ಈಗಾಗಲೇ ಟೆಂಡರ್ ಕರೆಯಲಾಗಿದ್ದು, ಸದರಿ ಕಾಮಗಾರಿಗಳನ್ನು ಶೀಘ್ರವಾಗಿ ಪೂರ್ಣಗೊಳಿಸಿ 100% ವೈಜ್ಞಾನಿಕ ರೀತಿಯಲ್ಲಿ ಕಸ ವಿಲೇವಾರಿ ಮಾಡಲು ಅಗತ್ಯ ಕ್ರಮ ಕೈಗೊಳಲಾಗುವುದು. ಅಲ್ಲದೆ, ಸರ್ಕಾರವು ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ವಿವಿಧ ಮೂಲಭೂತ ಸೌಕರ್ಯಅಭಿವೃದ್ಧಿ ಕಾಮಗಾರಿಗಳಾದ ರಸ್ತೆ ಹಾಗೂ ಚರಂಡಿಗಳ ನಿರ್ಮಾಣ, ಸಣ್ಣ ಪ್ರಮಾಣದ ಮಾರುಕಟ್ಟೆಗಳ ನಿರ್ಮಾಣ, ತರಕಾರಿ/ಕೋಳಿ/ಮಾಂಸ/ಮೀನು ಮಾರುಕಟ್ಟೆಗಳ ನಿರ್ಮಾಣ, ಸ್ಮಶಾನದ ಅಭಿವೃದ್ಧಿ, ಸಾರ್ವಜನಿಕ ಶೌಚಾಲಯಗಳ ನಿರ್ಮಾಣ, ಕುಡಿಯುವ ನೀರಿನ ಕಾಮಗಾರಿಗಳಾದ ಪೈಪ್‌ಗಳ ದುರಸ್ಥಿ ಇತ್ಯಾದಿಗಳನ್ನು ಕೈಗೊಳ್ಳಲು ಎಸ್.ಎಫ್.ಸಿ ಮುಕ್ತನಿಧಿ ಅನುದಾನ, ಎಸ್.ಎಫ್.ಸಿ ಕುಡಿಯುವ ನೀರು ಅನುದಾನ, ಸ್ವಚ್ಛ ಭಾರತ ಮಿಷನ್‌ಅನುದಾನ, ನಗರೋತ್ಥಾನ ಯೋಜನೆ ಹಾಗೂ 14ನೇ ಹಣಕಾಸು ಆಯೋಗ ಅನುದಾನಗಳನ್ನು ಮಂಜೂರು ಮಾಡಿ ಬಿಡುಗಡೆಗೊಳಸುತ್ತಿರುತ್ತದೆ. |

| | | |
|---|---|---|
| ಇ) | ಮೂಲ ಸೌಕರ್ಯ ಕಲ್ಪಿಸಲು ಸರ್ಕಾರವು ವಿಶೇಷ ಅನುದಾನವನ್ನೇನಾದರೂ ಒದಗಿಸಿದೆಯೇ; (ವಿವರ ನೀಡುವುದು) | ಬೀದರ್ 2017-18ನೇ ಸಾಲಿನಲ್ಲಿ ಮೂಲ ಸೌಕರ್ಯ ಕಲ್ಪಿಸಲು ಸರ್ಕಾರವು ರೂ.10.00 ಕೋಟಿ ಎಸ್.ಎಫ್.ಸಿ ವಿಶೇಷ ಅನುದಾನವನ್ನು ಮಂಜೂರು ಮಾಡಿ, ಇದುವರೆವಿಗೂ ರೂ.9.50 ಕೋಟಿಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. |
| ಈ) | ಹಾಗಿದ್ದಲ್ಲಿ, ಎಷ್ಟು ಪ್ರಮಾಣದ ಅನುದಾನವನ್ನು ಒದಗಿಸಿ ಮೂಲ ಸೌಕರ್ಯಗಳನ್ನು ಯಾವ ಕಾಲಮಿತಿಯೊಳಗಾಗಿ ಕಲ್ಪಿಸಲಾಗುವುದು? | ಘನತ್ಯಾಜ್ಯ ವಸ್ತು ನಿರ್ವಹಣೆಗಾಗಿ 14ನೇ ಹಣಕಾಸು ಆಯೋಗದ ಅನುದಾನವನ್ನು ಗರಿಷ್ಠ ಶೇಕಡ 40ರಷ್ಟು ಬಳಸಬಹುದಾಗಿದ್ದು, ಬೀದರ್ ನಗರಸಭೆಗೆ 2019-20ನೇ ಸಾಲಿಗೆ 14ನೇ ಹಣಕಾಸು ಆಯೋಗ, ಎಸ್.ಎಫ್.ಸಿ ಮುಕ್ತನಿಧಿ ಅನುದಾನ, ಎಸ್.ಎಫ್.ಸಿ ಕುಡಿಯುವ ನೀರು ಯೋಜನೆಗಳಡಿ ಈ ಕೆಳಕಂಡಂತೆ ಅನುದಾನ ಬಿಡುಗಡೆಗೊಳಿಸಲಾಗಿದೆ.<br><br>(ರೂ. ಲಕ್ಷಗಳಲ್ಲಿ)<br>ಯೋಜನೆಗಳ ವಿವರ — ಬಿಡುಗಡೆಯಾದಅನುದಾನ<br>14ನೇ ಹಣಕಾಸುಆಯೋಗದ ಸಾಮಾನ್ಯ ಮೂಲ ಅನುದಾನ — 1252.72<br>ಎಸ್.ಎಫ್.ಸಿ ಮುಕ್ತನಿಧಿ ಅನುದಾನ — 334.37<br>ಎಸ್.ಎಫ್.ಸಿ ಕುಡಿಯುವ ನೀರುಅನುದಾನ — 20.00<br><br>**ಕೇಂದ್ರ ಪುರಸ್ಕೃತ'ಅಮೃತ್'ಯೋಜನೆ:**<br>ಕೇಂದ್ರ ಪುರಸ್ಕೃತ'ಅಮೃತ್'ಯೋಜನೆಯಡಿ ಬೀದರ್ ನಗರಸಭೆಗೆ ಮೂಲಸೌಕರ್ಯಗಳಾದ ಒಳಚರಂಡಿ ವ್ಯವಸ್ಥೆ ಮತ್ತು ಉದ್ಯಾನವನ ಮತ್ತು ಹಸಿರು ಜಾಗ ಅಭಿವೃದ್ಧಿಗಾಗಿ ಒಟ್ಟು ಅನುದಾನ ರೂ.176.99ಕೋಟಿ ಹಂಚಿಕೆ ಮಾಡಲಾಗಿದೆ.<br><br>'ಅಮೃತ್' ಯೋಜನೆಯಡಿ ಘನತ್ಯಾಜ್ಯ ವಸ್ತು ನಿರ್ವಹಣೆಯ ಕಾಮಗಾರಿಗಳು ಒಳಗೊಂಡಿಲ್ಲ. ಅಮೃತ್ ಯೋಜನೆಯಡಿ ಈ ಕೆಳಕಂಡ ವಲಯಗಳಲ್ಲಿ ಮಾತ್ರ ಕಾಮಗಾರಿಗಳನ್ನು ಕೈಗೊಳ್ಳಬಹುದಾಗಿದೆ.<br><br>1. ನೀರು ಸರಬರಾಜು<br>2. ಒಳಚರಂಡಿ ಮತ್ತುರೊಚ್ಚು ಸಂರಕ್ಷಣಾ ಘಟಕಗಳ ನಿರ್ವಹಣೆ<br>3. ಮಳೆ ನೀರುಚರಂಡಿ<br>4. ನಗರ ಸಾರಿಗೆ<br>5. ಹಸಿರು ಜಾಗ ಮತ್ತು ಉದ್ಯಾನವನಗಳ ಅಭಿವೃದ್ಧಿ |

ಕಡತ ಸಂಖ್ಯೆ: ನಅಇ 131 ಎಸ್.ಎಫ್.ಸಿ 2020

(ಬಿ.ಎ ಬಸವರಾಜ)
ನಗರಾಭಿವೃದ್ಧಿ ಸಚಿವರು